# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | 1195 |
| ಸದಸ್ಯರ ಹೆಸರು | ಶ್ರೀ ಟಿ.ಎ. ಶರವಣ (ವಿಧಾನಸಭೆಯಿಂದ ಚುನಾಯಿತರಾದವರು) |
| ಉತ್ತರಿಸಬೇಕಾದ ದಿನಾಂಕ | 26-2-2018 |
| ಉತ್ತರಿಸುವ ಸಚಿವರು | ಮಾನ್ಯ ಸಮಾಜ ಕಲ್ಯಾಣ ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು. |

| ಕ್ರ ಸಂ | ಪ್ರಶ್ನೆ | ಉತ್ತರ | Answer |
|---|---|---|---|
| ಅ) | ಕರ್ನಾಟಕ ರಾಜ್ಯದಲ್ಲಿ ಇರುವ ಆರ್ಯವೈಶ್ಯ ಜನಾಂಗಕ್ಕೆ ಸೇರಿದ ಜನಸಂಖ್ಯೆ ಎಷ್ಟು; (ಜಿಲ್ಲಾವಾರು ಮಾಹಿತಿ ನೀಡುವುದು) | ಕರ್ನಾಟಕ ರಾಜ್ಯ ಹಿಂದುಳಿದ ವರ್ಗಗಳ ಆಯೋಗದಿಂದ 2015-16ನೇ ಸಾಲಿನಲ್ಲಿ ಸಾಮಾಜಿಕ ಮತ್ತು ಶೈಕ್ಷಣಿಕ ಸಮೀಕ್ಷೆಯನ್ನು ಕೈಗೊಂಡು ರಾಜ್ಯದಲ್ಲಿನ ಎಲ್ಲಾ ಜಾತಿ/ಜನಾಂಗಗಳ ಮಾಹಿತಿಯನ್ನು ಸಂಗ್ರಹಿಸಲಾಗಿದೆ. ಮಾಹಿತಿಯ ವಿಶ್ಲೇಷಣಾ ಕಾರ್ಯ ಪ್ರಗತಿಯಲ್ಲಿದೆ. ಆಯೋಗವು ಸರ್ಕಾರಕ್ಕೆ ವರದಿಯನ್ನು ಸಲ್ಲಿಸಿದ ನಂತರ, ಆರ್ಯವೈಶ್ಯ ಜನಾಂಗಕ್ಕೆ ಸೇರಿದ ಜನಸಂಖ್ಯೆ ಮಾಹಿತಿಯು ಲಭ್ಯವಾಗಲಿದೆ. | Karnataka State Commission for Backward Classes had conducted Social and Educational Survey during 2015-16, and collected information all Castes/ Communities of the State. The analysis of this data is under progress. The information on population of Arya Vysya community will be available after the submission of the report to the Government by the Commission. |
| ಆ) | ಸದರಿ ಜನಾಂಗವು ಸಂಖ್ಯಾಧಾರಿತ ಮೀಸಲಾತಿಗಾಗಿ ಹಲವಾರು ವರ್ಷಗಳಿಂದ ಹೋರಾಟ ಮಾಡುತ್ತಾ ಬಂದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಸರ್ಕಾರವು ಈ ಕುರಿತು ತೆಗೆದುಕೊಂಡಿರುವ ಅಗತ್ಯ ಕ್ರಮಗಳೇನು; (ಸಂಪೂರ್ಣವಾದ ಮಾಹಿತಿ ನೀಡುವುದು) | -ಬಂದಿದೆ-<br>ಹಿಂದಿನ ಡಾ. ಸಿ.ಎಸ್. ದ್ವಾರಕನಾಥ್ ನೇತೃತ್ವದ ಕರ್ನಾಟಕ ರಾಜ್ಯ ಹಿಂದುಳಿದ ವರ್ಗಗಳ ಆಯೋಗವು 2010 ರಲ್ಲಿ ಸರ್ಕಾರಕ್ಕೆ ಸಲ್ಲಿಸಿರುವ ವಿಶೇಷ ವರದಿ ಸಲಹೆ ಸಂಖ್ಯೆ: 11 ರಲ್ಲಿ ಆರ್ಯವೈಶ್ಯ ಜನಾಂಗದವರನ್ನು ಹಿಂದುಳಿದ ವರ್ಗಗಳ ಮೀಸಲಾತಿ ಪಟ್ಟಿಗೆ ಸೇರಿಸುವ ಮನವಿಯನ್ನು ತಿರಸ್ಕರಿಸಿದೆ. | -Yes-<br>At suggestion No.11 of the Special report of 2010 submitted by the previous Karnataka State Commission for Backward Classes, headed by Dr.C.S.Dwarakanath to the Government had rejected inclusion of Arya Vysya community in Backward Classes reservation list. |

| | | | |
|---|---|---|---|
| | | ಪ್ರಸ್ತುತ ಆಯೋಗಕ್ಕೂ ಸಹ ಆರ್ಯ ವೈಶ್ಯ ಜನಾಂಗವನ್ನು ಹಿಂದುಳಿದ ವರ್ಗಗಳ ಜಾತಿ ಮೀಸಲಾತಿ ಪಟ್ಟಿಯಲ್ಲಿ ಸೇರಿಸುವಂತೆ ಮನವಿಗಳು ಸ್ವೀಕೃತವಾಗಿದ್ದು, ಈ ಬಗ್ಗೆ ಆಯೋಗವು ಬಹಿರಂಗ ವಿಚಾರಣೆಯನ್ನು ಈಗಾಗಲೇ ಪೂರ್ಣಗೊಳಿಸಿರುತ್ತದೆ.<br>ಮುಂದುವರೆದು, ಕರ್ನಾಟಕ ರಾಜ್ಯ ಹಿಂದುಳಿದ ವರ್ಗಗಳ ಆಯೋಗವು ಕೈಗೊಂಡ ಸಾಮಾಜಿಕ ಮತ್ತು ಶೈಕ್ಷಣಿಕ ಸಮೀಕ್ಷೆಯಲ್ಲಿ ಪ್ರತಿಯೊಂದು ಜಾತಿ/ಜನಾಂಗದ ಸಾಮಾಜಿಕ, ಶೈಕ್ಷಣಿಕ ಮತ್ತು ಆರ್ಥಿಕ ಸ್ಥಿತಿಗತಿಗಳ ಬಗ್ಗೆ ಮಾಹಿತಿಯನ್ನು ಸಂಗ್ರಹಿಸಲಾಗಿದ್ದು, ಮಾಹಿತಿಯ ವಿಶ್ಲೇಷಣಾ ಕಾರ್ಯವು ಪ್ರಗತಿಯಲ್ಲಿರುತ್ತದೆ. | The present Commission had also received requests to include Arya Vysya community into the reservation list, for which public hearing is already completed by the Commission.<br>Further, in the Social and Education Survey conducted by the Commission, it had collected information on social, educational and economic conditions of all castes/communities in the State. The analysis of this information is under progress. |
| ಇ) | ಆರ್ಯವೈಶ್ಯ ಜನಾಂಗಕ್ಕೆ ಮೀಸಲಾತಿ ಕಲ್ಪಿಸಲು ಸರ್ಕಾರವು ವಿಳಂಬ ನೀತಿಯನ್ನು ಅನುಸರಿಸುತ್ತಿರಲು ಕಾರಣವೇನು; | ಕರ್ನಾಟಕ ರಾಜ್ಯ ಹಿಂದುಳಿದ ವರ್ಗಗಳ ಆಯೋಗವು ಸರ್ಕಾರಕ್ಕೆ ಸಲ್ಲಿಸಲಿರುವ ಸಾಮಾಜಿಕ ಮತ್ತು ಶೈಕ್ಷಣಿಕ ಸಮೀಕ್ಷೆಯ ವರದಿಯಲ್ಲಿನ ಸಲಹೆ/ ಶಿಫಾರಸ್ಸುಗಳನ್ವಯ ಈ ವಿಷಯ ಕುರಿತು ಪರಿಶೀಲಿಸಲಾಗುವುದು. | Government will examine this matter based on suggestions/recommendations to be made by the Karnataka State Commission for Backward Classes in its survey report. |
| ಈ) | ಎಷ್ಟು ದಿನಗಳೊಳಗಾಗಿ ಸರ್ಕಾರವು ಆರ್ಯವೈಶ್ಯ ಜನಾಂಗಕ್ಕೆ ಮೀಸಲಾತಿ ಆದೇಶವನ್ನು ಹೊರಡಿಸಿ ಅವರ ಹೋರಾಟಕ್ಕೆ ಮನ್ನಣೆ ಸಿಗುವಂತೆ ಮಾಡುತ್ತದೆ? | ಕರ್ನಾಟಕ ರಾಜ್ಯ ಹಿಂದುಳಿದ ವರ್ಗಗಳ ಆಯೋಗವು ಸರ್ಕಾರಕ್ಕೆ ವರದಿಯನ್ನು ಸಲ್ಲಿಸಿದ ನಂತರ ಈ ಬಗ್ಗೆ ಪರಿಶೀಲಿಸಲಾಗುವುದು. | Government will examine the matter on receipt of the report from the Karnataka State Commission for Backward Classes. |

ಸಂಖ್ಯೆ: ಹಿಂವಕ 70 ಬಿಸಿಎ 2018

(ಹೆಚ್. ಆಂಜನೇಯ)
ಸಮಾಜ ಕಲ್ಯಾಣ ಹಾಗೂ ಹಿಂದುಳಿದ
ವರ್ಗಗಳ ಕಲ್ಯಾಣ ಸಚಿವರು.